# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜುಲೈ ೩೦, ೨೦೧೫ (ಶ್ರಾವಣ ೮, ಶಕ ವರ್ಷ ೧೯೩೭)<br>Bengaluru, Thursday, July 30, 2015 (Shravana 8, Shaka Varsha 1937) | ಸಂಚಿಕೆ ೩೧<br>Issue 31 |
|---|---|---|


## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 62 ಹೆಚ್‌ಎಂಬಿ 2014, ಬೆಂಗಳೂರು ದಿನಾಂಕ: 20.05.2015**

ಶ್ರೀ ಎಸ್.ಎಂ. ರುದ್ರಸ್ವಾಮಿ, ಸಹಾಯಕ ಕಾರ್ಯಪಾಲಕ ಅಭಿಯಂತರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಹಾವೇರಿ ಜಿಲ್ಲೆ ಇವರನ್ನು ನವದೆಹಲಿಯ ಕರ್ನಾಟಕ ಭವನದ ಉಪ ವಿಭಾಗದಲ್ಲಿ ಖಾಲಿಯಿರುವ ಸಹಾಯಕ ಕಾರ್ಯಪಾಲಕ ಅಭಿಯಂತರರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ಎರಡು ವರ್ಷಗಳ ಅವಧಿಗೆ ನೇಮಕ ಮಾಡಲಾಗಿದ್ದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 62 ಹೆಚ್‌ಎಂಬಿ 2014, ದಿನಾಂಕ: 09.02.2015ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಶ್ರೀ ಎಸ್. ಎಂ. ರುದ್ರಸ್ವಾಮಿ, ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ಪ್ರಸ್ತುತ ಕಾರ್ಯನಿರ್ವಾಹಕ ಅಧಿಕಾರಿ, ಕಲಘಟಗಿ ತಾಲ್ಲೂಕು ಪಂಚಾಯತ್, ಧಾರವಾಡ ಜಿಲ್ಲೆ ಇವರನ್ನು ನವದೆಹಲಿಯ ಕರ್ನಾಟಕ ಭವನದ ಲೋಕೋಪಯೋಗಿ ಉಪವಿಭಾಗದಲ್ಲಿ ಖಾಲಿಯಿರುವ ಸಹಾಯಕ ಕಾರ್ಯಪಾಲಕ ಅಭಿಯಂತರರ ಹುದ್ದೆಗೆ **"ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977"**ರ ನಿಯಮ 15(1) (ಬಿ) (II) ರನ್ವಯ ಗುತ್ತಿಗೆ ಆಧಾರದ ಮೇಲೆ ಕರ್ತ್ಯವ್ಯಕ್ಕೆ ಹಾಜರಾದ ದಿನದಿಂದ ಎರಡು ವರ್ಷಗಳ ಅವಧಿಗೆ ನೇಮಕ ಮಾಡಲಾಗಿದೆ.

**ಇವರ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳು ಈ ಕೆಳಗಿನಂತಿವೆ.**

1. **ಅವಧಿ:** ಶ್ರೀ ಎಸ್.ಎಂ. ರುದ್ರಸ್ವಾಮಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಪ್ರಸ್ತುತ ಕಾರ್ಯನಿರ್ವಾಹಕ ಅಧಿಕಾರಿ, ಕಲಘಟಗಿ ತಾಲ್ಲೂಕು ಪಂಚಾಯತ್, ಧಾರವಾಡ ಜಿಲ್ಲೆ ಇವರ ನವದೆಹಲಿಯ ಕರ್ನಾಟಕ ಭವನದಲ್ಲಿನ ಒಪ್ಪಂದದ ನೇಮಕಾತಿಯ ಅವಧಿಯು, ಅವರು ಕರ್ತ್ಯವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಇರುತ್ತದೆ.

2. **ವೇತನ ಮತ್ತು ಇತರೆ ಭತ್ಯೆಗಳು:** ಶ್ರೀ ಎಸ್.ಎಂ. ರುದ್ರಸ್ವಾಮಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಪ್ರಸ್ತುತ ಕಾರ್ಯನಿರ್ವಾಹಕ ಅಧಿಕಾರಿ, ಕಲಘಟಗಿ ತಾಲ್ಲೂಕು ಪಂಚಾಯತ್, ಧಾರವಾಡ ಜಿಲ್ಲೆ ಇವರು ಒಪ್ಪಂದದ ನೇಮಕಾತಿಯ ಅವಧಿಯಲ್ಲಿ ಅವರ ಮಾತೃ ಇಲಾಖೆಯಲ್ಲಿ ಪಡೆಯುತ್ತಿದ್ದ ವೇತನ, ತುಟ್ಟಿ ಭತ್ಯೆ, ಕಾರ್ಯನಿರ್ವಹಿಸುತ್ತಿರುವ ಸ್ಥಳಕ್ಕೆ ಅನ್ವಯವಾಗುವ ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆ, ಪಡೆಯಲು ಅರ್ಹರಿರುತ್ತಾರೆ. ಆದರೆ, ನೌಕರರು ನಿಯೋಜನೆಯ ಭತ್ಯೆ, ಅನ್ಯ ಸೇವಾ ಭತ್ಯೆ ಊಟದ ಭತ್ಯೆ, ಹೆಚ್ಚಿನ ಕಾಲದ ಭತ್ಯೆ, ಬೋನಸ್, ಅನುಗ್ರಹ ಪೂರ್ವ ಭತ್ಯೆ ಅಥವಾ ಇನ್ನಾವುದೇ ಭತ್ಯೆಯನ್ನು ಪಡೆಯಲು ಅರ್ಹರಿರುವುದಿಲ್ಲ

3. **ರಜಾ ನಿಯಮಗಳು:** ಇವರ ಮಾತ್ರ ಇಲಾಖೆಯಲ್ಲಿನ ರಜಾ ನಿಯಮಗಳಿಗೆ ಅರ್ಹರಿರುತ್ತಾರೆ.
4. **ವೈದ್ಯಕೀಯ ರಿಯಾಯಿತಿ:** 'ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963' ರನ್ವಯ ವೈದ್ಯಕೀಯ ವೆಚ್ಚವನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ. ಬಿ.ಎಸ್. ಮಂಜುನಾಥ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ರಾಜ್ಯ ಶಿಷ್ಠಾಚಾರ–1)

PR. 404
SC. 50

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕಾಇ 71 ಎಲ್‌ಡಬ್ಲ್ಯೂಎ 2015, ಬೆಂಗಳೂರು, ದಿನಾಂಕ: 22–05–2015.**

ಕರ್ನಾಟಕ ರಾಜ್ಯಾದ್ಯಂತ **"ನಗರ ಸ್ಥಳೀಯ ಸಂಸ್ಥೆಗಳು" ಹಾಗೂ "ಪಟ್ಟಣ ಮತ್ತು ಗ್ರಾಮ ಪಂಚಾಯ್ತಿ ಸಂಸ್ಥೆಗಳು**" ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. 1948 ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರ ನಿಯಮ ಸಂಖ್ಯೆ: XI) ಕಲಂ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಎರಡು (2) ತಿಂಗಳ ಅವಧಿಯೊಳಗೆ ಬಾಧಿತರಾಗುವ ವ್ಯಕ್ತಿಗಳಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು–560001 ಇವರಿಗೆ ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–560029 ಇವರಿಗೆ ಸಲ್ಲಿಸಬಹುದಾಗಿರುತ್ತದೆ.

1948ರ ಕನಿಷ್ಠ ವೇತನ ಕಾಯ್ದೆಯ ಕಲಂ 3(1)(ಬಿ) ಮತ್ತು 5(1)(ಬಿ)ರಡಿಯಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರವು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜಾದ್ಯಾಂತ ಯಾವುದೇ **"ನಗರ ಸ್ಥಳೀಯ ಸಂಸ್ಥೆಗಳು" ಹಾಗೂ "ಪಟ್ಟಣ ಮತ್ತು ಗ್ರಾಮ ಪಂಚಾಯ್ತಿ ಸಂಸ್ಥೆಗಳು**" ಉದ್ದಿಮೆಗೆ ಈ ಕೆಳಕಂಡಂತೆ ಕನಿಷ್ಠ ವೇತನ ದರಗಳು ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ ಸಂ | ಕೆಲಸದ ವರ್ಗಗಳು | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳು | | ರಾಜ್ಯದ ಎಲ್ಲಾ ನಗರಸಭೆಗಳು (ಗ್ರೇಡ್–1) | | ರಾಜ್ಯದ ಎಲ್ಲಾ ನಗರಸಭೆಗಳು (ಗ್ರೇಡ್–2) ಹಾಗೂ ಪುರಸಭೆಗಳು | | ರಾಜ್ಯದ ಎಲ್ಲಾ ಪಟ್ಟಣ ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳು | |
|---|---|---|---|---|---|---|---|---|---|
| | | ದಿನಕ್ಕೆ | ತಿಂಗಳಿಗೆ | ದಿನಕ್ಕೆ | ತಿಂಗಳಿಗೆ | ದಿನಕ್ಕೆ | ತಿಂಗಳಿಗೆ | ದಿನಕ್ಕೆ | ತಿಂಗಳಿಗೆ |
| 1 | ➢ ಗ್ರಂಥಪಾಲಕ<br>➢ ಕೆಮಿಸ್ಟ್<br>➢ ಸೂಪರ್ ವೈಸರ್ (ಸ್ಯಾನಿಟರಿ) | 360.00 | 9360.00 | 345.00 | 8970.00 | 335.00 | 8710.00 | 320.00 | 8320.00 |
| 2 | ➢ ಗುಮಾಸ್ತ<br>➢ ಕ್ಲರ್ಕ್<br>➢ ಕಂಪ್ಯೂಟರ್ ಆಪರೇಟರ್<br>➢ ಡಾಟಾ ಎಂಟ್ರಿ ಆಪರೇಟರ್<br>➢ ಕರವಸೂಲಿಗಾರರು<br>➢ ಎಲೆಕ್ಟ್ರೀಷಿಯನ್<br>➢ ಲ್ಯಾಬ್ ಟೆಕ್ನಿಷಿಯನ್<br>➢ ಸಹಾಯಕ ಗ್ರಂಥಪಾಲಕ | 345.00 | 8970.00 | 330.00 | 8580.00 | 315.00 | 8190.00 | 305.00 | 7930.00 |

| | | | | | | | | | |
|---|---|---|---|---|---|---|---|---|---|
| 3 | ಚಾಲಕರು ಕಂ ಆಪರೇಟರ್ಸ್<br>➢ ಯುಜಿಡಿ<br>➢ ಜೆಸಿಪಿ<br>➢ ಕಾಂಪಾಕ್ಟ್ ಮಷಿನ್<br>➢ ಸ್ಲೀಪಿಂಗ್ ಮಷಿನ್ | 350.00 | 9100.00 | 335.00 | 8710.00 | 315.00 | 8190.00 | 295.00 | 7670.00 |
| 4 | ಚಾಲಕರು | 340.00 | 8580.00 | 325.00 | 8450.00 | 310.00 | 8060.00 | 295.00 | 7670.00 |
| | ➢ ಲಾರಿ/ಬಸ್ಸು/ಟ್ರಾಕ್ಟರ್<br>➢ ಜೀಪು/ಕಾರು<br>➢ ಕ್ಲೀನರ್ಸ್ | 310.00 | 8060.00 | 275.00 | 7150.00 | 255.00 | 6630.00 | 240.00 | 6240.00 |
| 5 | ➢ ಪಂಪ್ ಆಪರೇಟರ್<br>➢ ಮೆಕ್ಯಾನಿಕ್<br>➢ ಬಾಲವಾಡಿ ಕಾರ್ಯಕರ್ತರು<br>➢ ವಾಹನ ಚಾಲಕರು<br>➢ ಪ್ಲಂಬರ್<br>➢ ಹಾರ್ಟಿಕಲ್ಚರ್ ಅಸಿಸ್ಟಂಟ್<br>➢ ಪಂಪು ರಿಪೇರಿ ಮಾಡುವವರು | 335.00 | 8710.00 | 320.00 | 8320.00 | 310.00 | 8060.00 | 300.00 | 7800.00 |
| 6 | ➢ ವಾಟರ್ ಮ್ಯಾನ್ (ನೀರು ಗಂಟಿ)<br>➢ ವಾಲ್ವ್ ಮ್ಯಾನ್ (ನೀರು ಸರಬರಾಜು) | 325.00 | 8450.00 | 310.00 | 8060.00 | 305.00 | 7930.00 | 295.00 | 7670.00 |
| 7 | ➢ ಜವಾನರು<br>➢ ಅಟೆಂಟರ್<br>➢ ಗಾರ್ಡನರ್<br>➢ ದಫೇದಾರ್<br>➢ ಸ್ಮಶಾನ ಕಾವಲುಗಾರ<br>➢ ಕಾವಲುಗಾರ<br>➢ ಕುಶಲರಲ್ಲದ ಇತರೆ ವರ್ಗಗಳು | 310.00 | 8060.00 | 295.00 | 7670.00 | 290.00 | 7540.00 | 285.00 | 7410.00 |
| 8 | ➢ ಲೋಡಿಂಗ್ ಮತ್ತು ಅನ್‌ಲೋಡಿಂಗ್ ಕೆಲಸಗಾರರು | 315.00 | 8190.00 | 280.00 | 7280.00 | 255.00 | 6630.00 | 245.00 | 6370.00 |
| 9 | ➢ ರಸ್ತೆಗಳನ್ನು ಗುಡಿಸುವುದು,<br>➢ ಒಳಚರಂಡಿ, ಸ್ನಾನಗೃಹ ಮತ್ತು ಶೌಚಾಲಯಗಳನ್ನು ಸ್ವಚ್ಛಗೊಳಿಸುವುದು | 310.00 | 8060.00 | 275.00 | 7150.00 | 250.00 | 6500.00 | 240.00 | 6240.00 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 5780 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 5780 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2014 ರಿಂದ ಡಿಸೆಂಬರ್ 2014)ರ ಸರಾಸರಿ ಆಧಾರದ ಮೇಲೆ 2015 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1) ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–

**ಅ) ಮಾಸಿಕ ವೇತನವನ್ನು ಪಡೆಯುವವರು:–** ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತಿಂಗಳ ತುಟ್ಟಿಭತ್ಯೆ

**ಆ) ದಿನಗೂಲಿ ವೇತನ ಪಡೆಯುವವರು :–**

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು} \times \text{ತುಟ್ಟಿಭತ್ಯೆಯ ದರ} \times 30}{26} = \text{ದಿನದ ತುಟ್ಟಿಭತ್ಯೆ}$$

2) ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು

3) ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ವೇತನ ದರಗಳನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.

4) ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5) ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6) ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.

7) ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8) ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9) ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10) ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11) ಸಮವಸ್ತ್ರಗಳನ್ನು ಹೊಂದಿರುವ ಕಾರ್ಮಿಕರುಗಳಿಗೆ ಹೆಚ್ಚುವರಿಯಾಗಿ **ಶುಭ್ರತಾ ಭತ್ಯೆ ರೂ. 300–00/–** ಗಳನ್ನು ಪ್ರತಿ ತಿಂಗಳು ವೇತನದೊಂದಿಗೆ ಪಾವತಿಸತಕ್ಕದ್ದು.

12) ಕ್ರ. ಸಂ. 9ರ ಕಾರ್ಮಿಕರುಗಳಿಗೆ ಹೆಚ್ಚುವರಿಯಾಗಿ **ಆರೋಗ್ಯ ಹಾನಿಕರ ಭತ್ಯೆ ರೂ. 500–00/–** ಗಳನ್ನು ಪ್ರತಿ ತಿಂಗಳು ವೇತನದೊಂದಿಗೆ ಪಾವತಿಸತಕ್ಕದ್ದು.

13) ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಪಿ. ನಾಗರತ್ನಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಕಾರ್ಮಿಕ ಇಲಾಖೆ

**PR. 395**
**SC. 200**

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 81 ಎಲ್‌ಡಬ್ಲ್ಯೂಎ 2015, ಬೆಂಗಳೂರು, ದಿನಾಂಕ: 22–05–2015**

ಕರ್ನಾಟಕ ರಾಜ್ಯಾದ್ಯಂತ **"ಮೀನು ಹಿಡಿಯುವುದು, ಮೀನು ಕ್ಯೂರಿಂಗ್, ಮೀನು ಪೀಲಿಂಗ್, ಕಪ್ಪೆ ಕಾಲು ರಫ್ತು ಮಾಡುವುದು"** ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. 1948 ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರ ನಿಯಮ ಸಂಖ್ಯೆ: XI) ಕಲಂ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಎರಡು (2) ತಿಂಗಳ ಅವಧಿಯೊಳಗೆ ಬಾಧಿತರಾಗುವ ವ್ಯಕ್ತಿಗಳಿಂದ ಸಲಹೆ/ ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸ ಸೌಧ, ಬೆಂಗಳೂರು–560001 ಇವರಿಗೆ ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–560029 ಇವರಿಗೆ ಸಲ್ಲಿಸಬಹುದಾಗಿರುತ್ತದೆ.

1948ರ ಕನಿಷ್ಠ ವೇತನ ಕಾಯ್ದೆಯ ಕಲಂ 3(1)(ಬಿ) ಮತ್ತು 5(1)(ಬಿ)ರಡಿಯಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರವು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ **"ಮೀನು ಹಿಡಿಯುವುದು, ಮೀನು ಕ್ಯೂರಿಂಗ್, ಮೀನು ಪೀಲಿಂಗ್, ಕಪ್ಪೆ ಕಾಲು ರಫ್ತು ಮಾಡುವುದು"** ಉದ್ದಿಮೆಗೆ ಈ ಕೆಳಕಂಡಂತೆ ಕನಿಷ್ಠ ವೇತನ ದರಗಳು ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ.ಸಂ. | ಕೆಲಸದ ವಿವರಗಳು | ಕನಿಷ್ಠ ವೇತನ ದರಗಳು | |
|---|---|---|---|
| | | ದಿನಕ್ಕೆ | ತಿಂಗಳಿಗೆ |
| 1. | ಪ್ರಾಜೆಕ್ಟ್ ಆಫೀಸರ್, ಪ್ಲಾಂಟ್ ಇನ್ ಚಾರ್ಜ್,ಮಾರ್ಕೆಟಿಂಗ್ ಆಫೀಸರ್,ಫೀಲ್ಡ್ ಆಫೀಸರ್,ಇಂಜಿನೀಯರ್ | 525.00 | 13,650.00 |
| 2. | ಕೋಲ್ಡ್ ಸ್ಟೋರೇಜ್ ಸೂಪರ್ ವೈಸರ್/ಪ್ರೊಸೆಸಿಂಗ್ ಸೂಪರ್ ವೈಸರ್/ಪ್ರೊಡಕ್ಷನ್ ಸೂಪರ್ ವೈಸರ್ ಮತ್ತು ಇತರೆ ಸೂಪರ್‌ವೈಸರ್‌ಗಳು | 520.00 | 13,520.00 |
| 3. | ಕೆಮಿಸ್ಟ್/ಟೆಕ್ನೀಷಿಯನ್ ಕಮ್ ಸೂಪರ್‌ವೈಸರ್, ಆಪರೇಟರ್, ಮೇಷಿನ್ ಆಪರೇಟರ್, ಪ್ರೊಸಸ್ ವರ್ಕರ್, ಕ್ಯೂರಿಂಗ್ ಆಪರೇಟರ್ ಗ್ರೇಡಿಂಗ್, ಹೆವಿಡ್ಯೂಟಿ ಡ್ರೈವರ್, ಎಲೆಕ್ಟ್ರೀಷಿಯನ್, ಕಾರ್ಪೆಂಟರ್, ಮೆಕ್ಯಾನಿಕ್, ಬಾಯ್ಲರ್ ಆಪರೇಟರ್, ರೆಫ್ರಿಜರೇಟರ್ ಮೆಕ್ಯಾನಿಕ್, ಡ್ರೈವರ್, ಟಲಿಫೋನ್ ಆಪರೇಟರ್, ಯಾಂತ್ರಿಕ ದೋಣಿಗಳಲ್ಲಿ ಮೀನು ಹಿಡಿಯುವ ಕಾರ್ಮಿಕರು, ನಾಡ ದೋಣಿಗಳಲ್ಲಿ ಹೋಗಿ ಬಲೆಯೊಂದಿಗೆ ಮೀನುಗಳನ್ನು ಹಿಡಿಯುವವರು. | 490.00 | 12,740.00 |
| 4. | ಲ್ಯಾಬೋರೇಟರಿ ಸಹಾಯಕ, ಪ್ರೊಕ್ಯೂರ್‌ಮೆಂಟ್ ಸಹಾಯಕ, ನೀರು ಶೇಖರಣೆಗೆ ಅಚ್ಚು ನಿರ್ಮಿಸುವುದು, ಸೀಗಡಿ/ಮೀನು ಮರಿಗಳ ಉತ್ಪಾದನೆಯ ಸಹಾಯಕರು, ಮೀನು ಮರಿಗಳನ್ನು ಸಾಗಿಸುವ ಮತ್ತು ಕೆರೆಗಳಲ್ಲಿ ಬಿಡುವ ಕೆಲಸಗಾರರು, ಬಲೆಗಳನ್ನು ಸೆಳೆಯುವವರು, ಬೋಟ್ ಡ್ರೈವರ್, ಲೈಟ್ ಬೋಟ್ ಡ್ರೈವರ್. | 475..00 | 12,350.00 |
| 5. | ಐಸ್ ಡಂಪರ್/ಡಂಪರ್, ದೋಣಿಗಳಿಂದ ಇಳಿಸುವವರು, ಮಾರುಕಟ್ಟೆಗೆ ಸಾಗಿಸುವವರು, ಮಾರಾಟಗಾರರು, ಯಾಂತ್ರೀಕೃತ ದೋಣಿಗಳನ್ನು ನೀರಿನ ಮಟ್ಟಕ್ಕೆ ಒಯ್ಯುವ ಮತ್ತು ನೀರಿನಿಂದ ಮೇಲಕ್ಕೆ ತರುವ ಕಾರ್ಮಿಕರು, ಡೆಕ್ ಲೋಡರ್, ಡೆಕ್ ಅನ್ ಲೋಡರ್, ಮೀನುಗಳನ್ನು ಕತ್ತರಿಸುವವರು, ಸಿಪ್ಪೆ ತೆಗೆಯುವವರು ಮತ್ತು ಸ್ವಚ್ಛಗೊಳಿಸುವವರು, ಐಸ್ ಪುಡಿ ಮಾಡುವವರು. | 455.00 | 11,830.00 |

| | | | |
|---|---|---|---|
| **6.** | ಮೀನುಗಳಿಗೆ ಐಸ್ ಮತ್ತು ಉಪ್ಪು ಬೆರೆಸುವವರು, ಮೀನುಗಳನ್ನು ಒಣಗಿಸುವುದು ಮತ್ತು ಕಾವಲು ಕಾಯುವವ, ಮರಿಗಳನ್ನು ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಸಾಗಿಸುವವರು, ಗೊಬ್ಬರ ಆಹಾರ ಹಾಕುವವರು, ಸೀಗಡಿ ಮೀನುಗಳನ್ನು ಹಿಡಿಯುವವರು [ನದಿ, ಕೆರೆ ಮತ್ತು ಕೊಳಗಳಲ್ಲಿ] ಮೀನುಗಳನ್ನು ಸಾಗಿಸುವವರು, ವಾಚ್‌ಮನ್, ಅಟೆಂಡರ್, ವೆಹಿಕಲ್ ಕ್ಲೀನರ್, ಶುಚಿ ಮಾಡುವವರು, ಮಜ್ದೂರ್ [ವರ್ಕಿಂಗ್ ಆನ್ ಲ್ಯಾಂಡರ್] ಸ್ಕಾವೆಂಜರ್ | **455.00** | **11,830.00** |
| | | | **ಪ್ರತಿ ದಿನಕ್ಕೆ** |
| **7.** | ಉಪ್ಪು ನೀರು ಸಿಗಡಿ ಕೃಷಿಯಲ್ಲಿ ನೇಮಿಸಿಕೊಂಡಿರುವ ಕಾರ್ಮಿಕರು | **450.00** | |
| **8.** | ಸಸಿಕಳೆ ಕೀಳುವವರು | **375.00** | |
| **9.** | **ಪೀಲಿಂಗ್ ಮತ್ತು ವೀನಿಂಗ್ ವಿಭಾಗದಲ್ಲಿ ತೊಡಗಿರುವ ಕೆಲಸಗಾರರಿಗೆ** | | |
| ಅ | ದೊಡ್ಡ ಗಾತ್ರದ್ದು | | |
| ಆ | ಚಿಕ್ಕ ಗಾತ್ರದ್ದು | **450.00** | |
| ಇ | ಬೀ ಹೆಡ್ಡಿಂಗ್ | | |
| **10.** | **ಕಪ್ಪೆಗಳ ಕಾಲುಗಳು** | | |
| ಅ | ಜಂಬೋ | | |
| ಆ | ದೊಡ್ಡ ಗಾತ್ರದ್ದು | | |
| ಇ | ಮಧ್ಯ ಗಾತ್ರದ್ದು | | |
| ಈ | ಸಣ್ಣ ಗಾತ್ರದ್ದು | **450.00** | |
| **11.** | **ಕಛೇರಿ ಸಿಬ್ಬಂದಿ** | **ದಿನಕ್ಕೆ** | **ತಿಂಗಳಿಗೆ** |
| 1. | ಮ್ಯಾನೇಜರ್/ ಪರ್ಸನಲ್ ಆಫೀಸರ್ | **520.00** | **13,520.00** |
| 2. | ಅಸಿಸ್ಟೆಂಟ್ ಮ್ಯಾನೇಜರ್/ಅಸಿಸ್ಟೆಂಟ್ ಪರ್ಸನಲ್ ಮ್ಯಾನೇಜರ್ | **490.00** | **12,740.00** |
| 3. | ಅಕೌಂಟೆಂಟ್/ಪ್ರಥಮ ದರ್ಜೆ ಸಹಾಯಕ/ಪದವೀಧರ ಸಹಾಯಕ/ ಕ್ಯಾಷಿಯರ್/ ಶೀಘ್ರಲಿಪಿಗಾರ/ ಕಂಪ್ಯೂಟರ್‌ಆಪರೇಟರ್/ಸ್ಟೋರ್ ಕೀಪರ್/ ಗುಮಾಸ್ತ/ಕ್ಲರ್ಕ | **385.00** | **10,010.00** |
| 4 | ಬೆರಳಚ್ಚುಗಾರ/ಡಾಟಾ ಎಂಟ್ರೀ ಆಪರೇಟರ್ | **380.00** | **9,880.00** |
| 5. | ಆಫೀಸ್‌ಬಾಯ್/ಪ್ಯೂನ್/ವಾಚಮನ್/ ಅಟೆಂಡರ್/ಸ್ವೀಪರ್ | **375.00** | **9,750.00** |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 6205 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 6205 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 5 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2015 ರಿಂದ ಡಿಸೆಂಬರ್ 2015)ರ ಸರಾಸರಿ ಆಧಾರದ ಮೇಲೆ 2016 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1) ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–

**ಅ) ಮಾಸಿಕ ವೇತನವನ್ನು ಪಡೆಯುವವರು:–** ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತಿಂಗಳ ತುಟ್ಟಿಭತ್ಯೆ

**ಆ) ದಿನಗೂಲಿ ವೇತನ ಪಡೆಯುವವರು :–**

$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30}}{26}$ = ದಿನದ ತುಟ್ಟಿಭತ್ಯೆ

2) ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು

3) ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ವೇತನ ದರಗಳನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.

4) ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5) ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6) ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.

7) ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8) ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9) ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10) ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11) ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಪಿ. ನಾಗರತ್ನಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)

ಕಾರ್ಮಿಕ ಇಲಾಖೆ

PR. 396

SC. 200

## ಕಂದಾಯ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕಂಇ 26 ಮುಆಬಿ 2015 ಬೆಂಗಳೂರು, ದಿನಾಂಕ: 06–06–2015**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ (1997)ರ ಕಲಂ 23(ಎ) (ii) ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಧಾರವಾಡ ಜಿಲ್ಲೆ, **ಧಾರವಾಡ ಸಿಟಿ ಮಾಳಾಪುರದ ಜನತಾ ಕಾಲೋನಿ, ಶ್ರೀ ಗಜಾನನ ದೇವಸ್ಥಾನವನ್ನು** ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಟಿ. ಜಯರಾಮೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ಮುಜರಾಯಿ)

PR-456

SC-25

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 29 ಮುಅಬಿ 2015 ಬೆಂಗಳೂರು, ದಿನಾಂಕ: 06–06–2015**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ (1997)ರ ಕಲಂ 23(ಎ) (ii) **ರಲ್ಲಿ** ಪ್ರದತ್ತವಾದ ಅಧಿಕಾರ ಚಲಾಯಿಸಿ, **ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ರಾಮನಮಲಿ ಗ್ರಾಮದ ಶ್ರೀ ಗವಿಬಸಪ್ಪಸ್ವಾಮಿ ದೇವಸ್ಥಾನವನ್ನು** ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಟಿ. ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಮುಜರಾಯಿ)

**PR-457**
**SC-25**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 30 ಮುಅಬಿ 2015 ಬೆಂಗಳೂರು, ದಿನಾಂಕ: 18–06–2015**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ (1997)ರ ಕಲಂ 23(ಎ) (ii) **ರಲ್ಲಿ** ಪ್ರದತ್ತವಾದ ಅಧಿಕಾರ ಚಲಾಯಿಸಿ, **ಬೆಂಗಳೂರು ನಗರ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಮಂಚಪ್ಪನ ಹೊಸಹಳ್ಳಿ ಗ್ರಾಮದಲ್ಲಿರುವ ಶ್ರೀ ಮುತ್ತುರಾಯಸ್ವಾಮಿ ದೇವಸ್ಥಾನವನ್ನು** ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಟಿ. ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಮುಜರಾಯಿ)

**PR-458**
**SC-25**

## PERSONNEL AND ADMINISTRATIVE REFORMS SECRETARIAT

### NOTIFICATION

**NO. DPAR 40 SeVuNya 2015 BENGALURU, DATED: 19-06-2015.**

In exercise of the powers conferred by section 9 of the Code of Criminal Procedure read with Section 3 of the Prevention of Corruption Act, 1988 (Central Act 49 of 1988) and in accordance with the High Court Notification No: GOB(I)1/2015, dated: 16-06-2015 and Letter No. GOB (l)1/2015, dated: 16-06-2015 of Registrar General, High Court of Karnataka, the Government of Karnataka hereby appoints the following Judicial Officers in the cadre of District Judges as the Presiding Officers of Special Courts estabilished under Previention of Corruption Act, with immediate effect.

| SL No. | Name and Designation | Place of Posting |
|---|---|---|
| 1 | Sri. Ashwathanarayana<br>XLVI Additional City Civil and Sessions Judges, Bengaluru City. | XLVII Additional City Civil and Sessions Judge, Bengaluru City.<br>(Vice Sri, K.H. Mallappa – transferred) |
| 2 | Sri. K.H. Mallappa, XLVII Additional City Civil and Sessions Judge, Bengaluru City. | XLVI Additional City Civil and Sessions Judge, Bengaluru City.<br>(Vice Sri. Ashwathanarayana transferred). |

By order and in the name of the Governor of Karnataka
**Dr. Geetha.L**
Under Secretary to Government
Department of Personnel and Administrative Reforms
(Services-3)

**PR-472**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59